ಸಂ. ೨ ೪೪ ಬೆಲೆ : ೫೦ ಪೈಸೆ

Shimoga.

# ಸರ್ವಜ್ಞನ ಪದಗಳು

ಸರ್ವಜ್ಞನೆಂಬುವನು ಗರ್ವದಿಂದಾದವನೆ ?
ಸರ್ವರೊಳೊಂದೊಂದು ನುಡಿಗಲಿತ ವಿದ್ಯದ
ಪರ್ವತವೆ ಆದ ಸರ್ವಜ್ಞ



ವಯಸ್ಕರ ಶಿಕ್ಷಣ ಸಮಿತಿ
ಮೈಸೂರು






# ಓದುಗರಿಗೆ

---

ಸರ್ವಜ್ಞನ ಪದಗಳಲ್ಲಿ ಕೆಲವನ್ನು ನೀವು ಅಕ್ಷರ ಕಲಿಯುವುದಕ್ಕೂ ಓದುವುದಕ್ಕೂ ಉಪಯೋಗಿಸಿದ ಪುಸ್ತಕಗಳಲ್ಲಿ ಅಲ್ಲಲ್ಲಿ ಕೊಟ್ಟಿದೆ. ಸರ್ವಜ್ಞನ ವಚನಗಳು ಎಂದು ಸಿಕ್ಕಿರುವ ಪದಗಳು ಸುಮಾರು 2000. ಎಲ್ಲವನ್ನೂ ಓದಬೇಕೆಂದು ನಿಮ್ಮಲ್ಲಿ ಆಸೆ ಹುಟ್ಟಿಸುವುದಕ್ಕಾಗಿ ಇನ್ನು ಕೆಲವನ್ನು ಆರಿಸಿ ಇಲ್ಲಿ ಕೊಟ್ಟಿದೆ.

ಸರ್ವಜ್ಞ ಸುಮಾರು 400 ವರ್ಷಗಳ ಹಿಂದೆ ಧಾರವಾಡ ಜಿಲ್ಲೆಯ ಅಂಬಲೂರಿನಲ್ಲಿ ಹುಟ್ಟಿದನೆಂದು ಹೇಳುತ್ತಾರೆ. ಅವನು ಸಣ್ಣ ವಯಸ್ಸಿನಲ್ಲಿಯೇ ವೈರಾಗ್ಯವನ್ನು ತಾಳಿ, ಮನೆಬಿಟ್ಟು ಊರೂರು ಅಲೆಯುತ್ತ ಹೊರಟನು. ತನ್ನ ವಚನಗಳಲ್ಲಿ ಅಂಥ ಜಂಗಮರನ್ನು ಕುರಿತು ಹೀಗೆ ಹೇಳುತ್ತಾನೆ—

ಮಂಡೆ ಬೋಳಿಸಿಕೊಂಡು ತುಂಬುಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವರ
ಕಂಡು ನಂಬುವದು ಸರ್ವಜ್ಞ

ಅಂಥವರನ್ನು ಕಂಡು ತಾನೂ ಅವರಂತೆ ಇರಬೇಕು ಎಂದು ಆಶಿಸಿರಬೇಕು—

ಕರದಿ ಕಪ್ಪರ ಉಂಟು ಹಿರಿದೊಂದು ನಾಡುಂಟು
ಹರನೆಂಬ ದೈವ—ನಮಗುಂಟು ತಿರಿವರಿಂ
ಸಿರಿವಂತರಾರು ? ಸರ್ವಜ್ಞ

ಹೋದಕಡೆ ಕಂಡದ್ದನ್ನು ಕುರಿತು ಮಾತನಾಡಿದ್ದಾನೆ. ಅದರಲ್ಲಿ ನೀತಿಯನ್ನು ತುಂಬಿದ್ದಾನೆ. ಜನರ ಆಚಾರವ್ಯವಹಾರಗಳು ಸರಿಯೆನಿಸಿದ್ದ ಬಾಯಿ ತುಂಬ ಹೊಗಳಿದ್ದಾನೆ. ಅವರ ಬೂಟಾಟಿಕೆಯನ್ನು ಕಂಡಾಗ ಮನಸಾ ಬೈದಿದ್ದಾನೆ.

ಅವನು ಏನೇ ಹೇಳಲಿ, ಎಲ್ಲದರಲ್ಲೂ ಒಂದು ಸೊಗಸಿದೆ, ನೀತಿ ಇದ ಎಲ್ಲವೂ ಅನುಭವದ ಮಾತುಗಳು.

ನಮ್ಮ ಬುದ್ಧಿಯನ್ನು ತಿವಿದು ಎಚ್ಚರಿಸಿ ತಿಳುವಿನ ಕಡೆ ಪ್ರೇರೇಪಿಸುವುದ ಮಹಾತ್ಮರ ನುಡಿಯ ಲಕ್ಷಣ. ಅಂತ ಮಾತುಗಳು ಈ ಪದಗಳಲ್ಲಿ ತುಂಬಿವ ಈ ವಚನ ನೋಡಿ—

ಮಡಿಯನುಟ್ಟವರನ್ನು ನುಡಿಸುವರು ವಿನಯದಲಿ
ಒಡಹುಟ್ಟಿದವರು—ಅರುವೆಯನು ಉಟ್ಟಿಹರೆ
ನುಡಿಸನಾಚುವರು ! ಸರ್ವಜ್ಞ

ಉಟ್ಟಿರುವ ಬಟ್ಟೆ ಜನಕ್ಕೆ ಗೌರವ ತರುವುದು. ಮಾಸಿದ ಬಟ್ಟೆ ಉಟ್ಟವನನ್ನು ಅಣ್ಣತಮ್ಮಂದಿರು ಕೂಡ ಮಾತನಾಡಿಸಲು ಹಿಂಜರ ಯುತ್ತಾರೆ.



---

# ಸರ್ವಜ್ಞನ ಪದಗಳು

---

ದೇವನೊಬ್ಬ ನಾಮ ಹಲವು” ಎಂದು ಬಸವಣ್ಣನವರು ಹೇಳಿದಂತೆ—

ಆದೇವ ಈದೇವ ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೆ ದೇವ ಸರ್ವಜ್ಞ

ಭಗವಂತ ಎಲ್ಲಿದ್ದಾನೆ ? —

ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ
ತಾಗಿಲ್ಲ ತಪ್ಪು ತಡೆಯಿಲ್ಲ ಲಿಂಗಕೆ
ದೇಗುಲವೆ ಇಲ್ಲ ಸರ್ವಜ್ಞ

ವನು ಎಲ್ಲಿಲ್ಲ ? ಅವನಿಲ್ಲದ ಜಾಗವೇ ಇಲ್ಲ—

ಸಣ್ಣನೆಯ ಮಳಲೊಳಗೆ ನುಣ್ಣನೆ ಶಿಲೆಯೊಳಗೆ
ಬಣ್ಣಿಸಿ ಬರೆವ ಪಟದೊಳಗೆ ಇರುವಾತ
ತನ್ನೊಳಗೆ ಇರನೆ ಸರ್ವಜ್ಞ

ಕಲ್ಲಿನಲಿ ಮಣ್ಣಿನಲಿ ಮುಳ್ಳಿನಾ ಮೊನೆಯಲ್ಲಿ
ಎಲ್ಲಿ ನೆನದಲ್ಲಿ ಶಿವನಿರ್ಪ ಅವ ನೀನಿ
ದ್ದಲ್ಲಿಯೇ ಇರುವ ಸರ್ವಜ್ಞ

ಈ ಅರಿವು ಇಲ್ಲದೆ ಗುಡಿಯಲ್ಲಿ ಹಣ್ಣು ಕಾಯಿ ಮಾಡಿಸಿದರೆ ಪಲವೇನು?—

ಕಲ್ಲುಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ
ಕಲ್ಲ ಮೇಲ್ಕಲ್ಲ ಕೊಳುವ ಮಾನವರೆಲ್ಲ
ಕಲ್ಲಿನಂತಹರು ಸರ್ವಜ್ಞ

ಅಲ್ಲದೆ—

ಉಣಬಂದ ಜಂಗಮಕೆ ಉಣಬಡಿಸಲೊಲ್ಲದೆಲಿ
ಉಣದಿಪ್ಪ ಲಿಂಗಕುಣಬಡಿಸಿ ಕೈ ಮುಗಿವ
ಬಣಗುಗಳ ನೋಡ! ಸರ್ವಜ್ಞ

(ಬಣಗುಗಳ=ಮೂಢರ)

ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು
ಎತ್ತು ಗಾಣವನು ಹೊತ್ತು ತಾ ನಿತ್ಯದಿ
ಸುತ್ತಿ ಬಂದಂತೆ ಸರ್ವಜ್ಞ

ಹಾಗೆಯೇ ಆಡಂಬರದ ಆಚಾರವೂ ವ್ಯರ್ಥ—

ಸುಟ್ಟ ಬೂದಿಯ ತಂದು ದಟ್ಟವಾಗಿಯೆ ಬಡಿದು
ಶ್ರೇಷ್ಠ ಸ್ವರ್ಗವನು ಅಡರುವಡೆ ಕತ್ತೆ ತಾ
ಕೆಟ್ಟ ಕೇಡೇನು ಸರ್ವಜ್ಞ

ಜವಾದ ಭಕ್ತನಿಗೆ—

ಮನೆಯೇನು ವನವೇನು ನೆನಹು ಇದ್ದರೆ ಸಾಕು
ಮನಮುಟ್ಟಿ ಶಿವನ ನೆನೆಯದನು ಬೆಟ್ಟದಾ
ಕೊನೆಯಲ್ಲಿದ್ದೇನು ? ಸರ್ವಜ್ಞ

ಮನದಲ್ಲಿ ನೆನವರಿಗೆ ಮನೆಯೇನು ಮಠವೇನು ?
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲಿದ್ದೇನು ಸರ್ವಜ್ಞ

ಇಂತ ಮಹಾತ್ಮರನ್ನು ಹುಡುಕಿಕೊಂಡು ಹೋಗಿ ತಿಳಿವನ್ನು ಡೆಯಬೇಕು.

ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ
ಮತ್ತೆ ಪಾದದಾ ಕೆರವಾಗಿ ಗುರುವಿನಾ
ಹತ್ತಲಿರು ಎಂದ ಸರ್ವಜ್ಞ

ವರ ಲಕ್ಷಣವೇನು ?—

ತನ್ನ ನೋಡಲಿ ಎಂದು ಕನ್ನಡಿಯು ಕರೆವುದೇ
ತನ್ನಲ್ಲಿ ಜ್ಞಾನವುದಿಸಿದ ಮಹಾತ್ಮನು
ಕನ್ನಡಿಯಂತೆ ಸರ್ವಜ್ಞ

ನಿತ್ಯ ನೇಮಗಳೇಕೆ ಮತ್ತೆ ಪೂಜೆಗಳೇಕೆ
ನೆತ್ತಿ ಬೋಳೇಕೆ, ಜಡೆಯೇಕೆ ವದನದಿ
ಸತ್ಯವುಳ್ಳವಗೆ ಸರ್ವಜ್ಞ

ಬೊಮ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು
ಬೊಮ್ಮವನು ಅರಿದು ಉಸುರಿದರೆ ಕಳಹೋಗಿ
ಕೆಮ್ಮಿದಂತಕ್ಕು ಸರ್ವಜ್ಞ

ಸತ್ಯವನು ಅರಿದಿಹರೆ ಸತ್ತಹಾಗಿರಬೇಕು
ಸತ್ಯವನು ಅರಿದು ಉಸುರಿದರೆ ಸತ್ತವರಿ
ಗತ್ತ ಹಾಗಕ್ಕು ಸರ್ವಜ್ಞ

ನಾನು ಜ್ಞಾನಿ ಎಂದು ಅವರು ಸಾರುವುದಿಲ್ಲ—

ಬಲ್ಲೆನೆಂಬುವ ಮಾತು ಎಲ್ಲವೂ ಹುಸಿಕಾಣೊ
ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ
ಬಲ್ಲವನೆ ಬಲ್ಲ ಸರ್ವಜ್ಞ

ಅವರಿಗೆ ಆ ಜಾತಿ, ಈ ಜಾತಿ ಎಂಬ ಅಭಿಮಾನವಿಲ್ಲ—

ಕೋತಿಗೆ ಗುಣವಿಲ್ಲ ಮಾತಿಗೆ ಕೊನೆಯಿಲ್ಲ
ಸೋತು ಹೋದವಗೆ ಸುಖವಿಲ್ಲ; ಅರಿದವಗೆ
ಜಾತಿಯೋ ಇಲ್ಲ ಸರ್ವಜ್ಞ

ನಡತೆಯಿಂದಲೇ ದೊಡ್ಡತನ—

ಮಾತಿಂಗೆ ಮಾತುಗಳು ಓತು ಸಾಸಿರವುಂಟು
ಮಾತಾಡಿದಂತೆ ನಡೆದರಾ ಕೈಲಾಸ
ಕಾತನೇ ಒಡೆಯ ಸರ್ವಜ್ಞ

ಂಥ ಸತ್ಯವಂತರು ದೇವರನ್ನು ಒಲಿಸಿಕೊಳ್ಳುತ್ತಾರೆ—

ಸತ್ಯರಿಗೆ ಧರೆಯೆಲ್ಲ ಮಸ್ತಕದಿ ಎರಗುವುದು
ಹೆತ್ತ ತಾಯ್ಮಗನ ಕರೆವಂತೆ ಶಿವನವರ
ನೆತ್ತಿ ಕೊಂಬುವನು ಸರ್ವಜ್ಞ

ಡತೆ ಚೆನ್ನಾಗುವುದಕ್ಕೆ ಏನುಮಾಡಬೇಕು ?-ಒಂದೊಂದಾಗಿ ತಿಳಿಸುತ್ತಾನೆ

ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ
ಕಡುರೋಷವೆಂಬ ವಿಷವೇರಿ ಸಮತೆ ಗಾ
ರುಡಿಗನಂತಕ್ಕು ಸರ್ವಜ್ಞ

ಕೋಪವೆಂಬುದ ಕೇಳಿ ಪಾಪದ ನೆಲೆಗಟ್ಟು
ಕೂಪದೊಳು ನೀಱುಹರಿದಂತೆ ನರಕದಿ
ಕೋಪಿ ತಾನಿಳಿವ ಸರ್ವಜ್ಞ

"ಹುತ್ತವ ಬಡಿದಡೆ, ಹಾವು ಸಾಯಬಲ್ಲುದೇ ಅಯ್ಯಾ?" ಎಂದು ಸವಣ್ಣನವರು ಕೇಳಿದರು ಹಾಗೆ—

ಒಡಲ ದಂಡಿಸಿ ಮುಕ್ತಿ ಪಡೆವೆನೆಂಬವ ಹೆಡ್ಡ
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ
ಮಡಿಯುವುದೆ ಹೇಳು ಸರ್ವಜ್ಞ

ಕಚ್ಚೆ ಕೈ ಬಾಯಿಗಳು ಇಚ್ಛೆಯಲಿ ಇದ್ದಿಹರೆ
ಅಚ್ಯುತನು ಅಪ್ಪ ಅಜನಪ್ಪ, ಲೋಕದಲಿ
ನಿಶ್ಚಿಂತನಪ್ಪ ಸರ್ವಜ್ಞ

ಜಾತಿಗಳ ಬಡಿದಾಟವನ್ನು ನೋಡಿ ಸರ್ವಜ್ಞ ಕೇಳುತ್ತಾನೆ—

ಜಾತಿ ಹೀನರ ಮನೆಯ ಜ್ಯೋತಿ ತಾ ಹೀನವೇ
ಜಾತಿ ವಿಜಾತಿಯೆನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ

ದೇವರು ಕುಲವನ್ನು ಅರಸುವುದಿಲ್ಲ—

ಎಲುವಿಲ್ಲ ನಾಲಗೆಗೆ ಬಲವಿಲ್ಲ ಬಡವಂಗೆ
ತೊಲೆ ಕಂಬವಿಲ್ಲ ಗಗನಕ್ಕೆ ; ದೇವರಲಿ
ಕುಲಭೇದವಿಲ್ಲ ಸರ್ವಜ್ಞ

ನಮ್ಮ ಒಡನಾಡಿಗಳನ್ನು ಎಚ್ಚರದಿಂದ ಆರಿಸಿಕೊಳ್ಳಬೇಕು. ಅ
ಸಜ್ಜನರಾದರೆ—

ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ
ದುರ್ಜನರ ಸಂಗದೊಡನಾಟ ಬಚ್ಚಲಿನ
ರೊಚ್ಚೆನಂತಿಹುದು ಸರ್ವಜ್ಞ

ಸತ್ಯರಾ ನುಡಿ ತೀರ್ಥ ನಿತ್ಯರಾ ನಡೆ ತೀರ್ಥ
ಉತ್ತಮರ ಸಂಗವದು ತೀರ್ಥ ಹರಿವ ನೀ
ರೆತ್ತಣದು ತೀರ್ಥ ಸರ್ವಜ್ಞ

ದುರ್ಜನರು ಹೇಗಿರುತ್ತಾರೆಂದರೆ ನೋಡುವುದಕ್ಕೆ ಹೊರಗೆ ಚೆನ್ನು, ಒಳಗೆ ವಿಷ—

ಕೆಂಪು ಫಲದೊಳಗೆಲ್ಲ ಕೆಂಪು ಮೆಕ್ಕೆಯು ಹಣ್ಣು
ಕೆಂಪುಂಟು ಒಳಗೆ ವಿಷವುಂಟು ; ದುರ್ಜನರ
ಇಂಪು ಇಂತೆಂದ ಸರ್ವಜ್ಞ

ಅವರ ಮಧ್ಯೆ ಇರಬೇಕಾದರೆ ಎಚ್ಚರ ಇರಬೇಕು—

ದಂತಪಂಕ್ತಿಯು ನಡುವೆ ಎಂತಿರ್ಪುದದು ಜಿಹ್ವೆ
ಅಂತು ದುರ್ಜನರ ಬಳಸಿನಲಿ ಸಜ್ಜನನು
ನಿಂತಿರ್ಪ ನೋಡ ಸರ್ವಜ್ಞ

ಇತರರ ಸಂಕಟವನ್ನು ಕಂಡು ಅಯ್ಯೋ ಎನ್ನುವುದು, ಅವರನ್ನು ಸಂತೈಸುವುದು, ಬೇಡಿದವರಿಗೆ ಕೈಯ್ಯಾರೆ ಕೊಡುವುದು ಇವು ಜ್ಞಾನಿಯ ಲಕ್ಷಣ—

ಅನ್ನವನು ಇಕ್ಕುವದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದಡೇ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ

ಈವಂಗೆ ದೇವಂಗೆ ಆವುದಂತರವಯ್ಯ
ದೇವನು ಜಗಕೆ ಕೊಡುವನು ಕೈಯ್ಯಾರೆ
ಈವನೇ ದೇವ ಸರ್ವಜ್ಞ

ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ
ಕಟ್ಟಿಹುದು ಬುತ್ತಿ ಸರ್ವಜ್ಞ

ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು
ಇಚ್ಛೆಯು ತೀರ್ದ ಬಳಿಕಿತ್ತ ಮಾಣಿಕವು
ನುಚ್ಚಿನಿಂದತ್ತ ಸರ್ವಜ್ಞ

ಆದ್ದರಿಂದ ಕೊಡಬೇಕಾದರೆ—

ಆಗ ಬಾ ಈಗ ಬಾ ಹೋಗಿ ಬಾ ಎನ್ನದೇ
ಆಗಲೇ ಕರೆದು ಕೊಡುವನ ಧರ್ಮ ಹೊ
ನ್ನಾಗದೇ ಬಿಡದು ಸರ್ವಜ್ಞ

ಸಿರಿ ಬಂದ ಕಾಲಕ್ಕೆ ಕರೆದು ದಾನವಮಾಡು
ಪರಿಣಾಮವಕ್ಕು ಪದವಕ್ಕು ಕೈಲಾಸ
ನೆರೆಮನೆಯೆ ಅಕ್ಕು ಸರ್ವಜ್ಞ

ಮೇಲು ಕೀಳೆನಬೇಡ ಶೀಲವನು ಬಿಡಬೇಡ
ಕಾಲವಕಾಲವೆನಬೇಡ ಧರ್ಮದಾ
ಕೀಲ ಬೇರೆಂದ ಸರ್ವಜ್ಞ

ಕೊಡುವಾಗ ಕೈ ಹಿಂತೆಗೆದರೆ ಫಲ ಹೋಯಿತು—

ಕೊಡುವವನ ಧರ್ಮಕ್ಕೆ ಕಡೆಯೇನು ಮೊದಲೇನು ?
ಎಡತಾಕಿಸಿಕೊಂಡು ಕೊಡುವವನ ಧರ್ಮವು
ಹುಡಿಯು ಮಣ್ಣಿಂದ ಸರ್ವಜ್ಞ

ಆಡದೇ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ
ನಾಡಿಕೊಡದವನು ಸರ್ವಜ್ಞ

ಕೊಡದ ಲೋಭಿಯ ಬದುಕು ಬಲು ಕಷ್ಟ, ಹೇಗೆಂದರೆ—

ಉಣ್ಣೆ ಕೆಚ್ಚಲೊಳಿದ್ದು ಉಣ್ಣದದು ನೊರೆವಾಲ
ಪುಣ್ಯವಮಾಡಿ ಉಣಲೊಲ್ಲದವನಿರವು
ಉಣ್ಣೆಯಿಂ ಕಷ್ಟ ಸರ್ವಜ್ಞ

ಹೊತ್ತಾರೆ ಬಯ್ಗಿಂಗೆ ಮತ್ತೆ ಬಾ ಎಂದೆನುತ
ಹೊತ್ತನೆ ಕೊಂದು ಹುಸಿವವನಿಗಿಂತಲು
ಸತ್ತಾತ ಲೇಸು ಸರ್ವಜ್ಞ

ಎರೆಯಲೊಲ್ಲದ ಲೋಭಿ ಕರೆಯಲೊಲ್ಲದ ಆವು
ಬರೆಗಾಲ ಪಯಣ ಇವು ಮೂರು ತನ್ನ ತಾ
ನಿರಿದುಕೊಂಡಂತೆ ಸರ್ವಜ್ಞ

ದಾನಗಳಲ್ಲೆಲ್ಲ ಅನ್ನದಾನ ಹಿರಿದು—

ಅನ್ನದೇವರ ಮುಂದೆ ಇನ್ನು ದೇವರು ಉಂಟೆ ?
ಅನ್ನವಿರುವನಕ ಪ್ರಾಣವು ; ಜಗದೊಳ
ಗನ್ನವೇ ದೈವ ! ಸರ್ವಜ್ಞ

ನಿದ್ದೆಗಳು ಬಾರವು ಬುದ್ಧಿಗಳು ತಿಳಿಯವು
ಮುದ್ದಿನ ಮಾತು ಸೊಗಸದು ಬೋನದ
ಮುದ್ದೆ ತಪ್ಪಿದರೆ ಸರ್ವಜ್ಞ

ಮಾಡುವುದೆಲ್ಲ ಹೊಟ್ಟೆಗಾಗಿ—

ಕೊಟ್ಟಣವ ಕುಟ್ಟುವುದು ಮುಟ್ಟೆಯನು ಹೊರಿಸುವುದ
ಬಿಟ್ಟಿಕೊಲಿಗಳ ಮಾಡಿಸುವುದು ಗೇಣು
ಹೊಟ್ಟೆಕಾಣಯ್ಯ ಸರ್ವಜ್ಞ

ಲೋಕವಲ್ಲಿ ದುಡ್ಡಿದ್ದವನೇ ದೊಡ್ಡಪ್ಪ—

ಸಿರಿಯಣ್ಣನುಳ್ಳನಕ ಹಿರಿಯಣ್ಣನೆನಸಿಪ್ಪ
ಸಿರಿಯಣ್ಣ ಹೋದ ಮರುದಿನವೆ ಹಿರಿಯಣ್ಣ
ನರಿಯಣ್ಣನೆಂದ ಸರ್ವಜ್ಞ

ವಿದ್ಯೆಯ ಬೆಲೆ ಅಷ್ಟಿಷ್ಟಲ್ಲ—

ವಿದ್ಯವುಳ್ಳ ಮುಖವು ಮುದ್ದು ಬರುವಂತಿಕ್ಕು
ವಿದ್ಯವಿಲ್ಲದನಾ ಬರಿಮುಖವು ಹಾಳೂರ
ಹದ್ದಿನಂತಕ್ಕು ಸರ್ವಜ್ಞ

ಇದ್ದಲ್ಲಿ ಸಲುವ ಹೋಗಿದ್ದಲ್ಲಿಯೂ ಸಲುವ
ವಿದ್ಯೆಯುನು ಬಲ್ಲ ಬಡವನಾಗಿರಿಯು ಮೇ
ಲಿದ್ದರೂ ಸಲುವ ಸರ್ವಜ್ಞ

ಓದಿನ ಗುಟ್ಟು ಇದು—

ಓದಿದಾ ಓದು ತಾ ಮೇದ ಕಬ್ಬಿನ ಸಿಪ್ಪೆ
ಓದಿನಾ ಒಡಲನರಿದಿಹರೆ ಸಿಪ್ಪೆ ಕ
ಬ್ಬಾದಂತೆ ಕಾಣೋ ಸರ್ವಜ್ಞ

ಒಕ್ಕಲಿಲ್ಲದಿದ್ದರೆ ಊರು ಆದೀತೆ ಹಾಗೆಯೇ—

ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ
ಬಂಧುವಿಲ್ಲದ ಮನೆತನ ಜಗದೊಳು
ಚಂದವಲ್ಲೆಂದ ಸರ್ವಜ್ಞ

ತನ್ನ ಸ್ವಾತಂತ್ರ್ಯವೊ?—

ತಂತ್ರಿವಾದ್ಯವು ಲೇಸು ಮಂತ್ರಿಯಾ ಕೆಳೆ ಲೇಸು
ಯಂತ್ರವಾಹಕನ ದಯ ಲೇಸು ಜಗದಿ ಸ್ವ
ತಂತ್ರವೇ ಲೇಸು ಸರ್ವಜ್ಞ

ಅಡಿಯು ಮುಂದಿಡೆ ಸ್ವರ್ಗ ಅಡಿಯು ಹಿಂದಿಡೆ ನರಕ
ಅಡಿಗಶ್ವಮೇಧ ಫಲ; ಸ್ವಾಮಿಕಾರ್ಯಕ್ಕೆ
ಮಡಿಯಲೇಬೇಕು ಸರ್ವಜ್ಞ

ಸಂಸಾರವನ್ನು ಅಲ್ಲಗಳೆಯಬೇಡಿ. ಅದು ಉತ್ತಮ ಬಾಳ್ವೆಗೆ ಸಾಧನ—

ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನ್ನರಿವ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ

ಸುಣ್ಣವಿಲ್ಲದ ವೀಳ್ಯ ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ
ಎಣ್ಣೆ ಹೊಯ್ದಂತೆ ಸರ್ವಜ್ಞ

ಈ ಪದಗಳಲ್ಲಿ ಎಷ್ಟು ಅನುಭವ ತುಂಬಿದೆ ನೋಡಿ—

ಗವುಡನೊಳು ಹಗೆತನವು ಕಿವುಡನೊಳು ಏಕಾಂತ
ಪ್ರವುಢನೊಳು ಮೂಢನುಪದೇಶ ಹಸಿದೆದ್ದು
ತವುಡು ತಿಂದಂತೆ ಸರ್ವಜ್ಞ

ಕಣ್ಣು ನಾಲಗೆ ಮನವು ತನ್ನದೆಂದೆನಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನ ಕೊಲ್ಲುವುವು ಸರ್ವಜ್ಞ

ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲುಮುರಿದಂತೆ ಸರ್ವಜ್ಞ

ಗಡ್ಡವಿಲ್ಲದ ಮೋರೆ ದುಡ್ಡು ಇಲ್ಲದ ಚೀಲಿ
ಬಡ್ಡಿಯಸಾಲ ತರುವನಾ ಬಾಳುವೆಯು
ಅಡ್ಡಕ್ಕು ಬೇಡ ಸರ್ವಜ್ಞ

ಕಂಡುದನು ಆಡೆ ಭೂಮಂಡಲವು ಮುನಿಯುವುದು
ಕೊಂಡಾಡುತಿಚ್ಛೆನುಡಿದರೆ ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ

ಮಾತೇ ಮುತ್ತು, ಮಾತೇ ಮೃತ್ಯು ; ಎಂದು ಹೇಳುವಂತೆ—

ಮಾತು ಬಲ್ಲಹ ತಾನು ಸೋತುಹೋಹುದು ಲೇಸು
ಮಾತಿಂಗೆ ಮಾತು ಮತಿಸಲ್ಕೆ ವಿಧಿ ಬಂದು
ಆತುಕೊಂಡಿಹುದು ಸರ್ವಜ್ಞ

ಅಷ್ಟೇ ಅಲ್ಲದೆ, ಮಾತಿನಲ್ಲಿ ಚತುರತೆ ಇರಬೇಕು—

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದನ ಬರಿಮಾತು ಕಿವಿಯೊಳ್ ಕೂ
ರ್ದಸಿಯ ಬಡಿದಂತೆ ಸರ್ವಜ್ಞ

ಚಿಕ್ಕ ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು
ನಕ್ಕು ನಗಿಸುವಾ ನುಡಿಲೇಸು, ಊರಿಂಗೆ
ಒಕ್ಕಲಿಗ ಲೇಸು ! ಸರ್ವಜ್ಞ

ಇಂಥ ಎಷ್ಟೋ ಪದಗಳು ಗಾದೆಗಳಾಗಿ ಎಲ್ಲರ ಬಾಯಲ್ಲೂ ಇವೆ—

ಆಳಾಗಬಲ್ಲವನು ಆಳುವನು ಅರಸಾಗಿ
ಆಳಾಗಿ ಬಾಳಲರಿಯದವನು ಕಡೆಯಲ್ಲಿ
ಹಾಳಾಗಿ ಹೋಹ ಸರ್ವಜ್ಞ

ಒಬ್ಬನರಿದರೆ ಸ್ವಾಂತ ಇಬ್ಬರಲಿ ಏಕಾಂತ
ಇಬ್ಬರಿಂದೊಬ್ಬನರಿದು ಬೇರೊಬ್ಬನಾ
ಹಬ್ಬಿ ಲೋಕಾಂತ ಸರ್ವಜ್ಞ

ಬೇಸಾಯವನ್ನು ಕುರಿತು ಬಹಳ ಸ್ವಾರಸ್ಯವಾಗಿ ಹೇಳಿದ್ದಾನೆ—

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು
ಮೇಟಿಯಿಂ ರಾಟಿ ನಡೆದುದಲ್ಲದೆ ದೇಶ
ದಾಟವೇ ಕೆಡುಗು ಸರ್ವಜ್ಞ

ಉತ್ತೊಮ್ಮೆ ಹರಗದಲೆ ಬಿತ್ತೊಮ್ಮೆ ನೋಡದಲೆ
ಹೊತ್ತೇರಿ ಹೊಲಕೆ ಹೋಗಿಹರೆ ಅವ ತನ್ನ
ನೆತ್ತರವ ಸುಡುವ ಸರ್ವಜ್ಞ

ನಲ್ಲೆತ್ತು ಬಂಡಿ ಬಲವಿಲ್ಲದಾ ಆರಂಬ
ಕಲ್ಲು ಕಳೆಗಳನು ಬಿಟ್ಟವನು ಹೊಲದೊಳಗೆ
ಹುಲ್ಲನೇ ಬೆಳೆವ ಸರ್ವಜ್ಞ

ಹರಗದಾ ಎತ್ತಾಗಿ ಬರಡಾದ ಹಯನಾಗಿ
ಹರಟೆ ಹೊಡೆಯುವಾ ಮಗನಾಗೆ ಹೊಲದಲ್ಲಿ
ಕರಡವೇ ಬೆಳಗು ಸರ್ವಜ್ಞ

ದಂಡು ಇಲ್ಲದ ಅರಸು ಕೊಂಡವಿಲ್ಲದ ಹೋಮ
ಬಂಡಿಯಿಲ್ಲದವನ ಬೇಸಾಯ ತಲೆಹೋದ
ಮುಂಡದಂತಿಕ್ಕು ಸರ್ವಜ್ಞ

ಹೆಂಡ ಸಾರಾಯಿ ಕುಡಿಯುವವನನ್ನು ಕುರಿತು ಹೇಳುತ್ತಾನೆ—

ಸುರೆಯ ಸೇವಿಸುವಂಗೆ ಸಿರಿಗರ್ವಪಿಡಿದಂಗೆ
ದೊರೆಯಲ್ಲಿ ತೇಜಪಡೆದಂಗೆ ಶಿರವಿಹುದು
ಸ್ಥಿರವಲ್ಲ ನೋಡ ಸರ್ವಜ್ಞ

ಇನ್ನು ಊಟ ಹೇಗೆ ಮಾಡಬೇಕು ? ಏನು ಊಟಮಾಡಿದರೆ ಆರೋಗ್ಯ ?

ನವಣೆಯಾ ಬೋನಕ್ಕೆ ಹವಣುಳ್ಳ ತೊಗೆಯಾಗೆ
ಕವಣೆಗಲ್ಲಷ್ಟು ಬೆಣ್ಣೈದರೂಟದ
ಹವಣ ನೋಡೆಂದ ಸರ್ವಜ್ಞ

ಹಸಿಯದಿರೆ ಉಣಬೇಡ ಹಸಿದು ಮತ್ತಿರಬೇಡ
ಬಿಸಿಬೇಡ ತಂಗಳುಣಬೇಡ ವೈದ್ಯರಾ
ಬೆಸನವೇಬೇಡ ಸರ್ವಜ್ಞ

## ನೀವು ಓದಲೇಬೇಕಾದ ಪುಸ್ತಕಗಳು.....

ಜನಪ್ರಿಯ ವಾಲ್ಮೀಕಿ ರಾಮಾಯಣ

ಶರಣ ಚರಿತಾಮೃತ

ನನ್ನೂರು

ಗೋಕುಲ

ಭಗತ್‌ಸಿಂಗ್

ಸಿ. ವಿ. ರಾಮನ್

ವಚನ ಭಾಗವತ

ವಿದ್ಯಾಪೀಠಗಳು

ಶ್ರೀ ಶಂಕರಾಚಾರ್ಯ

ಆಂಡರ್‌ಸನ್ ಮತ್ತು ಇತರ ಕತೆಗಳು

ನಳಚರಿತ್ರೆಯ ಸಂಗ್ರಹ

ಗ್ರಂಟ್ವಿಗ್

**ಇನ್ನೂ ಅನೇಕ ಉಪಯುಕ್ತ ಪುಸ್ತಕಗಳನ್ನು ತರಿಸಿ ಓದಿರಿ**

ಪ್ರಕಾಶಕರು :
ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

ವಯಸ್ಕರ ಶಿಕ್ಷಣ ಸಮಿತಿ ಮುದ್ರಣಾಲಯ, ೫೦೦೦ ಪ್ರತಿಗಳು